# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ನವೆಂಬರ್ ೧, ೨೦೧೨ (ಕಾರ್ತೀಕ ೧೦, ಶಕ ವರ್ಷ ೧೯೩೪) | ಸಂಚಿಕೆ ೪೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ ಪ್ರತ್ಯೇಕ ಇಲಾಖೆಯನ್ನು ಪೂರಕ ಹುದ್ದೆಗಳೊಂದಿಗೆ ಸೃಜಿಸುವ ಬಗ್ಗೆ.

**ಓದಲಾಗಿದೆ:** ಸಮಾಜ ಕಲ್ಯಾಣ ಇಲಾಖೆಯ ಕಡತ ಸಂಖ್ಯೆ : ಸಕಇ 28 ಬಿಸಿಎ 2012.

**ಪ್ರಸ್ತಾವನೆ :**

ಮೇಲೆ ಓದಲಾದ ಕಡತದಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಹಿಂದುಳಿದ ವರ್ಗಗಳ ಕಲ್ಯಾಣ ಕಾರ್ಯಕ್ರಮಗಳ ಮೇಲುಸ್ತುವಾರಿಗಾಗಿ "ಪ್ರತ್ಯೇಕ ಸಚಿವಾಲಯ"ವನ್ನು ಸೃಜಿಸುವ ಬಗ್ಗೆ ವಿಶೇಷ ವರದಿ – 15/2010 ನ್ನು ನೀಡಿದ್ದು, ಅದರಲ್ಲಿ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿರುವ ಅಲ್ಪಸಂಖ್ಯಾತರನ್ನು ಹೊರತುಪಡಿಸಿ, ರಾಜ್ಯದ ಶೇಕಡ 55 ರಷ್ಟು ಜನಸಂಖ್ಯೆಯನ್ನು ಹೊಂದಿರುವ ಹಿಂದುಳಿದ ವರ್ಗಗಳ ಸರ್ವತೋಮುಖ ಅಭಿವೃದ್ಧಿಯ ದೃಷ್ಟಿಯಿಂದ ಸರ್ಕಾರದ ಹಂತದಲ್ಲಿ ಒಂದು ಪ್ರತ್ಯೇಕ ಹಿಂದುಳಿದ ವರ್ಗಗಳ ಸಚಿವಾಲಯವನ್ನು ಸೃಜಿಸುವಂತೆ ಮತ್ತು ಪ್ರತ್ಯೇಕ ಸಚಿವರನ್ನು ನೇಮಿಸುವಂತೆ ಸರ್ಕಾರಕ್ಕೆ ಸಲಹೆ ನೀಡಿರುತ್ತದೆ. 2012–13ನೇ ಸಾಲಿನ ಆಯವ್ಯಯದ ಚರ್ಚೆಯ ಅವಧಿಯಲ್ಲಿ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಪ್ರತ್ಯೇಕ ಸಚಿವಾಲಯ ಸೃಜಿಸಲಾಗುವುದೆಂದು ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿರುವ ಹಿನ್ನೆಲೆಯಲ್ಲಿ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡ ವಿವಿಧ ವೃಂದದ ಪೂರಕ ಸಿಬ್ಬಂದಿಗಳೊಂದಿಗೆ "**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**" ಯೆಂಬ ಪ್ರತ್ಯೇಕ ಸಚಿವಾಲಯವನ್ನು ಸೃಜಿಸಲು ಉದ್ದೇಶಿಸಲಾಗಿದೆ.

| ಹುದ್ದೆ | ಮಂಜೂರಾದ ಹುದ್ದೆಗಳ ವಿವರ | ಷರಾ |
|---|---|---|
| 1. ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 | ಹೊಸದಾಗಿ ಸೃಜಿಸಲಾಗಿದೆ. |
| ಎ) ಆಪ್ತ ಕಾರ್ಯದರ್ಶಿ | 1 | –,,– |
| ಬಿ) ಆಪ್ತ ಸಹಾಯಕರು (ಜಿ.ಪಿ.ಎ.) | 1 | –,,– |
| ಸಿ) ಕಿರಿಯ ಸಹಾಯಕರು/ಸಹಾಯಕರು | 1 | –,,– |

| ಹುದ್ದೆ | ಮಂಜೂರಾದ ಹುದ್ದೆಗಳ ವಿವರ | ಷರಾ |
|---|---|---|
| ಡಿ) ಶೀಘ್ರಲಿಪಿಗಾರರು | 2 | –„– |
| ಇ) ದಲಾಯತ್/ಜಮೇದಾರ | 2 | –„– |
| ಎಫ್) ವಾಹನ ಚಾಲಕರು | 1 | –„– |
| **ಒಟ್ಟು–ಎ** | **9** | |
| 2. ಉಪ ಕಾರ್ಯದರ್ಶಿ | 1 | –„– |
| ಎ) ಕಿರಿಯ ಸಹಾಯಕರು | 1 | –„– |
| ಬಿ) ಶೀಘ್ರಲಿಪಿಗಾರರು | 1 | –„– |
| ಸಿ) ಗ್ರೂಪ್–ಡಿ | 1 | –„– |
| **ಒಟ್ಟು–ಬಿ** | **4** | |
| 3. ಅಧೀನ ಕಾರ್ಯದರ್ಶಿ | 2 | –„– |
| ಎ) ಶೀಘ್ರಲಿಪಿಗಾರರು | 2 | –„– |
| ಬಿ) ಗ್ರೂಪ್–ಡಿ | 2 | –„– |
| **ಒಟ್ಟು–ಸಿ** | **6** | |
| 4. ಶಾಖಾಧಿಕಾರಿ | 3 | 2 ಹುದ್ದೆಗಳು ಸಮಾಜ ಕಲ್ಯಾಣ ಸಚಿವಾಲಯದಿಂದ ವರ್ಗಾವಣೆ, 1 ಹುದ್ದೆ ಹೊಸದಾಗಿ ಸೃಜಿಸಲಾಗಿದೆ. |
| ಎ) ಹಿರಿಯ ಸಹಾಯಕರು | 2 | 1 ಹುದ್ದೆ ಸಮಾಜ ಕಲ್ಯಾಣ ಸಚಿವಾಲಯದಿಂದ ವರ್ಗಾವಣೆ, 1 ಹುದ್ದೆ ಹೊಸದಾಗಿ ಸೃಜಿಸಲಾಗಿದೆ. |
| ಬಿ) ಸಹಾಯಕರು | 4 | 3 ಹುದ್ದೆಗಳು ಸಮಾಜ ಕಲ್ಯಾಣ ಸಚಿವಾಲಯದಿಂದ ವರ್ಗಾವಣೆ, 1 ಹುದ್ದೆ ಹೊಸದಾಗಿ ಸೃಜಿಸಲಾಗಿದೆ. |
| ಸಿ) ಕಿರಿಯ ಸಹಾಯಕರು | 2 | 2 ಹುದ್ದೆಗಳು ಸಮಾಜ ಕಲ್ಯಾಣ ಸಚಿವಾಲಯದಿಂದ ವರ್ಗಾವಣೆ. |
| ಡಿ) ಗ್ರೂಪ್–ಡಿ | 3 | 2 ಹುದ್ದೆಗಳು ಸಮಾಜ ಕಲ್ಯಾಣ ಸಚಿವಾಲಯದಿಂದ ವರ್ಗಾವಣೆ, 1 ಹುದ್ದೆ ಹೊಸದಾಗಿ ಸೃಜಿಸಲಾಗಿದೆ. |
| **ಒಟ್ಟು–ಡಿ** | **14** | |
| **ಒಟ್ಟು–(1+2+3+4)** | **33** | |

ಅದರಂತೆ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 394 ಸಅಸೇ 2012, ಬೆಂಗಳೂರು, ದಿನಾಂಕ : 04ನೇ ಆಗಸ್ಟ್ 2012**

ಪ್ರಸ್ತಾವನೆಯನ್ನು ಕೂಲಂಕೂಷವಾಗಿ ಪರಿಶೀಲಿಸಿರುವಂತೆ ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ "**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**" ಯನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆ | ಮಂಜೂರಾದ ಹುದ್ದೆಗಳ ವಿವರ |
|---|---|---|
| 1. | ಎ) ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 |
| | ಬಿ) ಆಪ್ತ ಕಾರ್ಯದರ್ಶಿ | 1 |
| | ಸಿ) ಆಪ್ತ ಸಹಾಯಕರು (ಜಿ.ಪಿ.ಎ.) | 1 |
| | ಡಿ) ಕಿರಿಯ ಸಹಾಯಕರು/ಸಹಾಯಕರು | 1 |
| | ಇ) ಶೀಘ್ರಲಿಪಿಗಾರರು | 2 |
| | ಎಫ್) ದಲಾಯತ್/ಜಮೇದಾರ | 2 |
| | ಜಿ) ವಾಹನ ಚಾಲಕರು | 1 |
| | **ಒಟ್ಟು–ಎ** | **9** |
| 2. | ಎ) ಉಪ ಕಾರ್ಯದರ್ಶಿ | 1 |
| | ಬಿ) ಕಿರಿಯ ಸಹಾಯಕರು | 1 |
| | ಸಿ) ಶೀಘ್ರಲಿಪಿಗಾರರು | 1 |
| | ಡಿ) ಗ್ರೂಪ್–ಡಿ | 1 |
| | **ಒಟ್ಟು–ಬಿ** | **4** |
| 3. | ಎ) ಅಧೀನ ಕಾರ್ಯದರ್ಶಿ | 2 |
| | ಬಿ) ಶೀಘ್ರಲಿಪಿಗಾರರು | 2 |
| | ಸಿ) ಗ್ರೂಪ್–ಡಿ | 2 |
| | **ಒಟ್ಟು–ಸಿ** | **6** |
| 4. | ಎ) ಶಾಖಾಧಿಕಾರಿ | 1 |
| | ಬಿ) ಹಿರಿಯ ಸಹಾಯಕರು | 1 |
| | ಸಿ) ಸಹಾಯಕರು | 1 |
| | ಡಿ) ಗ್ರೂಪ್–ಡಿ | 1 |
| | **ಒಟ್ಟು–ಡಿ** | **4** |
| | **ಒಟ್ಟು–(1+2+3+4)** | **23** |

ಕೆಳಕಂಡ ಹುದ್ದೆಗಳನ್ನು ಸಮಾಜ ಕಲ್ಯಾಣ ಇಲಾಖೆಯಿಂದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳಾಂತರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ಸಂಖ್ಯೆಗಳು |
|---|---|---|
| 1. | ಶಾಖಾಧಿಕಾರಿ | 2 |
| 2. | ಹಿರಿಯ ಸಹಾಯಕರು | 1 |
| 3. | ಸಹಾಯಕರು | 3 |
| 4. | ಕಿರಿಯ ಸಹಾಯಕರು | 2 |
| 5. | ಗ್ರೂಪ್–ಡಿ | 2 |
| | **ಒಟ್ಟು** | **10** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ಲಕ್ಷ್ಮೀನಾರಾಯಣ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

**ಪಿ.ಆರ್. 1900**

## ಆರ್ಥಿಕ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಆಇ 8 ಮಕಮು 2012 ಬೆಂಗಳೂರು, ದಿನಾಂಕ: 10ನೇ ಆಗಸ್ಟ್, 2012.**

**ವಿಷಯ:** ಹೆಚ್‌ಡಿಎಫ್‌ಸಿ ಸಂಸ್ಥೆಯಿಂದ ಪಡೆದ ಮನೆ ನಿರ್ಮಾಣ ಮುಂಗಡದ ಜಮೆಯಲ್ಲಾಗುತ್ತಿರುವ ತಪ್ಪು ವರ್ಗೀಕರಣವನ್ನು ತಡೆಗಟ್ಟುವ ಬಗ್ಗೆ.

**ಉಲ್ಲೇಖ:** ಪ್ರಧಾನ ಮಹಾಲೇಖಪಾಲರ (ಎ ಮತ್ತು ಇ) ಕಛೇರಿಯ ಪತ್ರ No. Loans 1/A3/12-13/07-08, dated: 17-04-2012.

ರಾಜ್ಯ ಸರ್ಕಾರಿ ನೌಕರರು ಹೆಚ್.ಡಿ.ಎಫ್.ಸಿ. ಸಂಸ್ಥೆಯ ಮೂಲಕ ಪಡೆದ ಗೃಹ ನಿರ್ಮಾಣ ಮುಂಗಡ ಮತ್ತು ಬಡ್ಡಿ ಮೊತ್ತವನ್ನು ನಿಗದಿತ ಕಂತುಗಳಲ್ಲಿ ಮರುಪಾವತಿಸಬೇಕಾಗಿದೆ. ಮನೆ ನಿರ್ಮಾಣ ಮುಂಗಡ ಪಡೆದಿರುವ ಮುಂಗಡದಾರರುಗಳ ವೇತನದಿಂದ ಮಾಸಿಕ ಕಂತುಗಳನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 95 ಎಹೆಚ್‌ಬಿ 89, ದಿನಾಂಕ: 11–09–1989ರ ಪ್ರಕಾರ ವಸೂಲು ಮಾಡಿ ಲೆಕ್ಕಶೀರ್ಷಿಕೆ '8443-00-106-0-23 PD Accounts of HDFC Advance'ಕ್ಕೆ ಜಮೆ ಮಾಡಬೇಕಾಗಿದೆ. ಆದರೆ, ಇತ್ತೀಚೆಗೆ ಕಂತುಗಳನ್ನು ಮೇಲ್ಕಂಡ ಲೆಕ್ಕಶೀರ್ಷಿಕೆಗೆ ಜಮೆ ಮಾಡುವ ಬದಲಿಗೆ, ತಪ್ಪು ವರ್ಗೀಕರಣದಿಂದ ಕಂತುಗಳನ್ನು '7610–00–201–0–03 ಪತ್ರಾಂಕಿತ ಅಧಿಕಾರಿ ಮತ್ತು ಪತ್ರಾಂಕಿತರಲ್ಲದ ಅಧಿಕಾರಿಗಳ ಮನೆ ನಿರ್ಮಾಣ ಮುಂಗಡ' ಲೆಕ್ಕ ಶೀರ್ಷಿಕೆಗೆ ಜಮಾ ಮಾಡಿರುವ ಪರಿಣಾಮವಾಗಿ, ಈ ಲೆಕ್ಕಶೀರ್ಷಿಕೆಯಡಿ ದಿನಾಂಕ:31–03–2011ರ ಅಂತ್ಯದವರೆಗೆ ಒಟ್ಟು ರೂ.1,206.56 ಲಕ್ಷಗಳು ಜಮೆಯಾಗಿದೆಯೆಂದು ಪ್ರಧಾನ ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು, ವಿವರಗಳೊಂದಿಗೆ ತಿಳಿಸಿರುತ್ತಾರೆ.

ಆದುದರಿಂದ ಇನ್ನು ಮುಂದೆ ಮುಂಗಡದಾರರುಗಳಿಂದ ನಿಯಮಾನುಸಾರ ವಸೂಲು ಮಾಡಿದ ಕಂತುಗಳನ್ನು ಲೆಕ್ಕಶೀರ್ಷಿಕೆ '8443–00–106–0–23 PD Accounts of HDFC Advance'ಕ್ಕೆ ಮಾತ್ರ ಜಮೆ ಮಾಡಲು ಕೂಡಲೇ ಅಗತ್ಯ ಕ್ರಮ ಕೈಗೊಳ್ಳಲು ಎಲ್ಲಾ ವೇತನ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳಿಗೆ ಸೂಚನೆ ನೀಡುವಂತೆ ಇಲಾಖಾ ಮುಖ್ಯಸ್ಥರುಗಳನ್ನು ಕೋರಲಾಗಿದೆ.

**ಎನ್.ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಪಿ.ಆರ್. 1887**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಆನಾಸ 184 ಡಿಆರ್‌ಎ 2012 ಬೆಂಗಳೂರು, ದಿನಾಂಕ: 20ನೇ ಜುಲೈ, 2012.**

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸುವ ಎ.ಪಿ.ಎಲ್ ಅಕ್ಕಿ ಮತ್ತು ಗೋಧಿಯ ಸಾಗಾಣಿಕೆ ವ್ಯವಸ್ಥೆಯನ್ನು ಪರಿಷ್ಕರಿಸಿ ದರವನ್ನು ನಿಗಧಿಪಡಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಆನಾಸ 184 ಡಿಆರ್‌ಎ 2012, ದಿನಾಂಕ: 11–7–2012.

ಸರ್ಕಾರದ ಆದೇಶ ಸಂಖ್ಯೆ : ಆನಾಸ 184 ಡಿಆರ್‌ಎ 2012, ದಿನಾಂಕ: 11–7–2012ರಲ್ಲಿನ ಪು: 3ರಲ್ಲಿರುವ ತಃಖ್ತೆಯಲ್ಲಿ ಗೋಧಿ ದರ ಪಟ್ಟಿಯ ಕ್ರಮ ಸಂಖ್ಯೆ : 3ರಲ್ಲಿ ರೂ.639–00 ಬದಲಾಗಿ ರೂ. 630–00 ಎಂದು, ಕ್ರಮ ಸಂಖ್ಯೆ :4(ಇ) ಬಾಬ್ತಿಗೆ ರೂ. 60–00ರ ಬದಲಾಗಿ ರೂ.69–00 ಎಂದು; ಪುಟ ಸಂಖ್ಯೆ: 4ರ 3ನೇ ಸಾಲಿನಲ್ಲಿ ಗೋಧಿಗೆ ಪ್ರತಿ ಕ್ವಿಂಟಾಲ್‌ಗೆ ರೂ. 136–00ರ ಬದಲಾಗಿ ರೂ. 145–00 ಎಂದು; ಹಾಗೂ ಪುಟ 5ರ 5ನೇ ಸಾಲಿನಲ್ಲಿ ಗೋಧಿಗೆ ರೂ.639–00ರ ಬದಲಾಗಿ ರೂ.630–00 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಮೇಲಿನ ತಿದ್ದುಪಡಿಗಳನ್ನು ಹೊರತುಪಡಿಸಿ, ಉಳಿದಂತೆ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ಪಿ.ಆರ್. 1975**

## ಕಂದಾಯ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಕಂಇ: ಆರ್‌ಡಿ 234 ಟಿಎನ್‌ಆರ್: 2012 ಬೆಂಗಳೂರು, ದಿನಾಂಕ: 01ನೇ ಆಗಸ್ಟ್, 2012.**

**ವಿಷಯ:** ರಾಜ್ಯದಲ್ಲಿ ಬರ ಪರಿಸ್ಥಿತಿ ಹಿನ್ನೆಲೆಯಲ್ಲಿ, ಮೇವು ಲಭ್ಯವಿರುವ ಜಿಲ್ಲೆಗಳಿಂದ ಕೊರತೆಯಿರುವ ಜಿಲ್ಲೆಗಳಿಗೆ ಸಾಗಿಸುವ ಬಗ್ಗೆ.

ರಾಜ್ಯದ 26 ಜಿಲ್ಲೆಗಳ 142 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶಗಳೆಂದು ಘೋಷಿಸಲಾಗಿರುತ್ತದೆ. ಸದರಿ ಬರಪೀಡಿತ ಹಲವು ಜಿಲ್ಲೆಗಳಲ್ಲಿ ಮೇವಿನ ಪೂರೈಕೆ ಅಗತ್ಯಕ್ಕಿಂತ ಹೆಚ್ಚು ಹಾಗೂ ಹಲವು ಜಿಲ್ಲೆಗಳಲ್ಲಿ ಮೇವಿನ ತೀವ್ರ ಕೊರತೆ ಇರುತ್ತದೆ. ಜಾನುವಾರುಗಳ ಹಿತದೃಷ್ಟಿಯಿಂದ ಮೇವು ಕೊರತೆ ಇರುವ ಜಿಲ್ಲೆಗಳಿಗೆ ಮೇವು ಪೂರೈಕೆ ಮಾಡಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ, ದಿನಾಂಕ:01–08–2012 ರಂದು ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ನಡೆದ ಸಚಿವ ಸಂಪುಟ ಉಪಸಮಿತಿಯ ತೀರ್ಮಾನದಂತೆ ಯಾವ ಜಿಲ್ಲೆಯಲ್ಲಿ ಮೇವಿನ ಲಭ್ಯತೆ ಹೆಚ್ಚಾಗಿರುತ್ತದೆಯೋ ಅಂತಹ ಜಿಲ್ಲೆಯ ಜಿಲ್ಲಾಧಿಕಾರಿಗಳು ಮೇವಿನ ತೀವ್ರ ಕೊರತೆಯಿರುವ ಪಕ್ಕದ ಜಿಲ್ಲೆಗಳ ಜಿಲ್ಲಾಧಿಕಾರಿಗಳನ್ನು ಸಂಪರ್ಕಿಸಿ ಯಾವುದೇ ರೀತಿಯ ಆಡಿಟ್ ಆಕ್ಷೇಪಣೆಗೆ ಅವಕಾಶ ನೀಡದಂತೆ ಮೇವನ್ನು ವರ್ಗಾಯಿಸಲು ಸೂಚಿಸಿದೆ.

**ಕೆ.ಅಮರನಾರಾಯಣ,**
ಸರ್ಕಾರದ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ).

**ಪಿ.ಆರ್. 1977**

## ಒಳಾಡಳಿತ ಸಚಿವಾಲಯ

**ವಿಷಯ:** ಪೊಲೀಸ್ ಅಧೀಕ್ಷಕರು ಮತ್ತು ಪ್ರಾಂಶುಪಾಲರು, ಪೊಲೀಸ್ ತರಬೇತಿ ಕಾಲೇಜು, ಗುಲ್ಬರ್ಗಾ ಹುದ್ದೆಯನ್ನು ದಿನಾಂಕ: 08–07–2012 ರಿಂದ 2 ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : 123 ಪಿಓಪಿ 2011, ದಿನಾಂಕ: 4–07–2011.

2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ : ಆರ್.ಎಲ್.ಎನ್(2)17(ಎ)/2001–02, ದಿನಾಂಕ: 14–06–2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಪೊಲೀಸ್ ಅಧೀಕ್ಷಕರು ಮತ್ತು ಪ್ರಾಂಶುಪಾಲರು, ಪೊಲೀಸ್ ತರಬೇತಿ ಕಾಲೇಜು, ಗುಲ್ಬರ್ಗಾ ಹುದ್ದೆಯನ್ನು ದಿನಾಂಕ: 09–07–2011 ರಿಂದ 1 ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸದರಿ ಹುದ್ದೆಗಳ ಅವಧಿಯು ದಿನಾಂಕ: 08–07–2012ಕ್ಕೆ ಮುಕ್ತಾಯವಾಗುವುದರಿಂದ ಸದರಿ ಹುದ್ದೆಗಳ ಅವಶ್ಯಕತೆಯಿರುವುದರಿಂದ ದಿನಾಂಕ: 09–07–2012 ರಿಂದ 2 ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ.

ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 127 ಪಿಓಪಿ 2012 ಬೆಂಗಳೂರು, ದಿನಾಂಕ:12–07–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪೊಲೀಸ್ ಅಧೀಕ್ಷಕರು ಮತ್ತು ಪ್ರಾಂಶುಪಾಲರು, ಪೊಲೀಸ್ ತರಬೇತಿ ಕಾಲೇಜು, ಗುಲ್ಬರ್ಗಾ ಹುದ್ದೆಯನ್ನು ದಿನಾಂಕ: 09–07–2012 ರಿಂದ 1 ವರ್ಷದ ಅವಧಿಗೆ ಅಥವಾ ಸದರಿ ಹುದ್ದೆಯಲ್ಲಿ ಪೊಲೀಸ್ ಅಧೀಕ್ಷಕರ ದರ್ಜೆಯ ಅಧಿಕಾರಿ ಇರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ, ಮುಂದುವರೆಸಿ ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಒಸಾಇ 34144 ಆಂಆಸ 2012, ದಿನಾಂಕ: 04–07–2012ರಲ್ಲಿ ನೀಡಿದ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16–05–2008 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್.ಪುಟ್ಟೇಗೌಡ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**ಪಿ.ಆರ್. 1980**

## PERSONNEL AND ADMINISTRATIVE REFORMS SECRETARIAT

### CORRIGENDUM

**No. DPAR 154 AAR 2012, Bangalore, Dated: 30th July, 2012.**

In Government Order No. DPAR 92 AAR 2009, dated: 8th July, 2010 wherever the figures " 2070-00-800-0-15-059" appear, shall be read as " 2052-00-090-0-25-059"

By Order and in the Name of the Governor of Karnataka

**Dr. Geetha.L**

Under Secretary to Government,

DPAR-AR (Training).

**P.R. 1984**

## ಕಂದಾಯ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಆರ್‌ಡಿ:47:ಎಲ್‌ಜಿಇ:2011, ಬೆಂಗಳೂರು, ದಿನಾಂಕ: 18ನೇ ಜುಲೈ, 2012.**

ಬಳ್ಳಾರಿ ತಾಲ್ಲೂಕು, ಮಿಂಚೇರಿ ಮತ್ತು ಹಲಕುಂದಿ ಗ್ರಾಮಗಳ ವಿವಿಧ ಸ.ನಂ.ಗಳ ಒಟ್ಟು ವಿಸ್ತೀರ್ಣ 23.32 ಎಕರೆ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ॥ ಸುಜಲಾನ್ ಇನ್‌ಫ್ರಾಸ್ಟಕ್ಚರ್ ಲಿಮಿಟೆಡ್ ಇವರಿಗೆ ಗುತ್ತಿಗೆ ಆಧಾರದ ಮೇಲೆ ನೀಡುವುದಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 82 ಎಲ್‌ಜಿಇ 2010 ದಿನಾಂಕ: 26–7–2011ರ ಆದೇಶ ಭಾಗದಲ್ಲಿ "ಪ್ರಥಮವಾಗಿ 10 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ" ಎಂಬುದರ ಬದಲು " 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ " ಎಂಬುದನ್ನು ಸೇರಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜೆ.ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

**ಪಿ.ಆರ್. 1988**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಸಿಐ 323 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ: 26ನೇ ಜೂನ್, 2012.**

ದಿನಾಂಕ: 27–05–2010ರ ಸರ್ಕಾರಿ ಆದೇಶ ಸಂಖ್ಯೆ : ಸಿಐ 323 ಎಸ್‌ಪಿಕ್ಯೂ 2010 ಆದೇಶ ಭಾಗದ ನಾಲ್ಕನೇ ಸಾಲಿನಲ್ಲಿ "..........ರೂ.10.00 ಲಕ್ಷದ (ಹತ್ತು ಲಕ್ಷ ರೂಪಾಯಿ) ಮಿತಿಗೆ ಹೆಚ್ಚಿಸಿ ಮಂಡಳಿಯ ಮೂಲಗಳಿಂದಲೇ ಈ ಮೊತ್ತವನ್ನು ಮಂಜೂರು ಮಾಡಲು ಆದೇಶಿಸಲಾಗಿದೆ." ಎಂದಿರುವುದನ್ನು "..........ರೂ.10.00 ಲಕ್ಷದ (ಹತ್ತು ಲಕ್ಷ ರೂಪಾಯಿ) ಮಿತಿಗೆ ಹೆಚ್ಚಿಸಿ ಮಂಡಳಿಯ ಮೂಲಗಳಿಂದ ಭರಿಸಿ ನಂತರ ಸರ್ಕಾರದಿಂದ ಮರುಪಾವತಿ ಪಡೆಯಲು ಆದೇಶಿಸಲಾಗಿದೆ." ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪಿ.ಆರ್. 1993**

## ENERGY SECRETARIAT

**CORRIGENDUM**

**No. EN 181 NCE 2012(I), Bangalore, Dated: 16th July, 2012.**

The following condition No.2 appearing in the order portion of the Government Order No. EN 333 NCE 2011 dated: 29th August, 2011

"M/s Sree Minerals is permitted to enter into wheeling and banking with concerned ESCOMs and KPTCL"

**Shall be substituted by the following**

**"PPA is assigned to GESCOM. GESCOM shall execute the PPA with M/s Sree Minerals under REC Mechanism".**

By Order and in the Name of the Governor of Karnataka

**KOUSALYA**

Under Secretary to Government,

Energy Department.

**P.R. 2009**

## HOME SECRETARIAT

**Sub :** Release of an instalment of Grant-in-Aid for improvement in justice delivery to States, under 13th Finance Commission Allocations, during the year 2012-13 by the Government of India for "Training of Public Prosecutors"- reg.

**Read :** 1) Government Order No. LAW 231 LAC 2010, dated 28-01-2011.

2) Government Order No. LAW 231 LAC 2010, dated 28-06-2011.

3) Government Order No. LAW 277 LCE 2011, dated 12-12-2011.

4) U.O. Note No. FD 27 FCC 2012, dated 08-05-2012.

**PREAMBLE :**

The 13th Finance Commission (FC XIII) has recommended a grant of Rs. 269.76 crores to improve justice delivery system for the State of Karnataka to be implemented from 2010-15. The Ministry of Finance, Department of Expenditure (Finance Commission Division), Government of India has issued guidelines for release and utilization of Grant-in-Aid for improvements in justice delivery system. High Level Monitoring Committee (HLMC) was constituted, to approve the Five year perspective Plan.

As per the guidelines of the Government of India, the HLMC has approved, the Five Year Perspective Plan for 2010-15, prepared by the Department of Law, Justice and Human Rights.

For the year 2012-13 a sum of Rs. 2.08 crores has been ear-marked for the component of "Training of Public Prosecutors".

The Finance Department in its U.O. Note read at (4) above, has conveyed its approval to the Home Department for taking action to release the grants with reference to 2012-13 approved provision in the Action Plan in respect of "Training of Public Prosecutors" component.

Hence the following order.

**GOVERNMENT ORDER NO. HD 234 PPE 2012, BANGALORE, DATED 12TH JULY 2012**

In the circumstances explained in the preamble, Government are pleased to release a sum of Rs. 2.08 crores (Rupees two crores eight lakhs only) required for the programmes under "Training of Public Prosecutors" during the year 2012-13 under the Head of Account "2014-00-800-1-04, XIII FCG-Improvement of Delivery for Justice – 059 other expenditure (non plan)."

2. The Department of Prosecution and Government Litigations should furnish utilisation certificate for utilising the said amount.

3. This order issued with the concurrence of Finance Department vide U.O. Note No. FD 27 FCC 2012, dated 08.05.2012.

By Order and in the name of the Governor of Karnataka,

**H.K. NINGAPPA,**

Under Secretary to Government

Home Department. (Police Services-'B')

**P.R. 1983**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** 13ನೇ ಹಣಕಾಸು ಆಯೋಗದ ಅನುದಾನದಿಂದ ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀವನ ಕಾರ್ಯದ ಕ್ರಿಯಾ ಯೋಜನೆಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 108 ಮಸಾವಿ 2010, ದಿನಾಂಕ 04ನೇ ಜುಲೈ 2011.
2. ಸರ್ಕಾರದ ಆದೇಶ ಸಂಖ್ಯೆ : ಸನೀಇ 108 ಮಸಾವಿ 2010, ದಿನಾಂಕ 28ನೇ ಸೆಪ್ಟಂಬರ್ 2011.
3. ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 10 ಆಆಕೋ 2012, ದಿನಾಂಕ 31–05–2012.

**ಪ್ರಸ್ತಾವನೆ :**

ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಕಾರ್ಯಕ್ರಮದಡಿ ರೂ. 350.00 ಕೋಟಿ ಅಂದಾಜು ಮೊತ್ತದಲ್ಲಿ 631 ಸಣ್ಣ ನೀರಾವರಿ ಕಾಮಗಾರಿಗಳ ದುರಸ್ತಿ/ಪುನರುಜ್ಜೀವನ ಯೋಜನೆಗೆ 4 ವರ್ಷಗಳಲ್ಲಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ. ಅನುಮೋದಿತ ಕ್ರಿಯಾ ಯೋಜನೆಯಂತೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿದ್ದು ವಾಸ್ತವಿಕ ಅವಶ್ಯಕತೆಗಳಿಗೆ ತಕ್ಕಂತೆ ಅಂದಾಜುಗಳನ್ನು ತಯಾರಿಸಲಾಗಿ ಕೆಲವು ಕಾಮಗಾರಿಗಳ ಅನುಮೋದಿತ ಅಂದಾಜು ಮೊತ್ತದಲ್ಲಿ ಉಳಿತಾಯವಾಗುತ್ತಿದೆ. ಅಲ್ಲದೆ ಆಡಳಿತಾತ್ಮಕ ಕಾರಣಗಳಿಂದ ಕೆಲವು ಕಾಮಗಾರಿಗಳನ್ನು ಕೈಬಿಡಬೇಕಾಗಿದೆ. ಅದೇ ರೀತಿ ಕೆಲವು ಕಾಮಗಾರಿಗಳ ವಾಸ್ತವಿಕ ಅಂದಾಜು ಮೊತ್ತವು ಅನುಮೋದಿತ ಮೊತ್ತಕ್ಕಿಂತ ಹೆಚ್ಚಳವಾಗುತ್ತಿದೆ ಹಾಗೂ ಕೆಲವು ಹೊಸ ಕಾಮಗಾರಿಗಳನ್ನು ಕೈಗೊಳ್ಳಲು ಸಹಾ ಪ್ರಸ್ತಾವನೆಯಿರುತ್ತದೆ. ಆದ್ದರಿಂದ ವಾಸ್ತವಿಕ ಅಂದಾಜಿನಂತೆ ಹಾಗೂ ಕಾಮಗಾರಿಗಳನ್ನು ಕೈಬಿಡುವುದರಿಂದ ಉಳಿತಾಯವಾಗಬಹುದಾದ ಅಂದಾಜು ಮೊತ್ತಕ್ಕೆ ಸಮನಾಗಿ ವಾಸ್ತವಿಕ ಅಂದಾಜು ಮೊತ್ತ ಹೆಚ್ಚಳವಾಗುತ್ತಿರುವ ಕಾಮಗಾರಿಗಳನ್ನು ಹಾಗೂ ಬದಲಿ ಕಾಮಗಾರಿಗಳನ್ನು ಕೈಗೊಳ್ಳಲು ಪ್ರಸ್ತಾವನೆಯನ್ನು 13ನೇ ಹಣಕಾಸು ಆಯೋಗದ ಕಾಮಗಾರಿಗಳಿಗೆ ಅನುಮೋದನೆ ನೀಡಲು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 24–05–2012 ರಂದು ನಡೆದ 6ನೆಯ ಉನ್ನತ ಮಟ್ಟದ ಮೇಲ್ವಿಚಾರಣಾ ಸಮಿತಿಯ ಸಭೆಗೆ ಮಂಡಿಸಲಾಗಿರುತ್ತದೆ. ಸಭೆಯಲ್ಲಿ ಇಲಾಖೆಯ ಪ್ರಸ್ತಾವನೆಗೆ ಅನುಮೋದನೆ ನೀಡಲಾಗಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 108 ಮಸಾವಿ 2010, ಬೆಂಗಳೂರು, ದಿನಾಂಕ : 22ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅನುಬಂಧದಲ್ಲಿ ತಿಳಿಸಿರುವ 14 ಕಾಮಗಾರಿಗಳಲ್ಲಿ ಉಳಿತಾಯವಾಗುವ ಮೊತ್ತದಲ್ಲಿ 2 ಕಾಮಗಾರಿಗಳಲ್ಲಿ ಉಂಟಾಗಿರುವ ಹೆಚ್ಚಳವನ್ನು ಭರಿಸಲು ಹಾಗೂ 11 ಬದಲಿ ಕಾಮಗಾರಿಗಳನ್ನು ಕೈಗೊಳ್ಳಲು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ANNEXURE

Additional/Alternative or Change in Minor Irrigation Works Approved Under 13th Finance Commission Grants

Rs. in Lakhs

| List of works approved having saving/Works dropped | | | | | | List of works involving Additional cost & or Alternative works approved | | | | |
|---|---|---|---|---|---|---|---|---|---|---|
| **Sl. No.** | **Districts** | **Taluk** | **Name of the Tank** | **Approved Estimated Cost as per action plan** | **Actual Estimated cost** | **Districts** | **Taluk** | **Name of the Tank** | **Estimated cast as per action plan** | **Estimated Cost as approved** |
| **1** | **2** | **3** | **4** | **5** | **6** | **7** | **8** | **9** | **10** | **11** |
| 1 | Mandya | Madduru | improvements to K. Belluru Tank (2nd year Sl.No. 157) | 46.00 | 5.00 | Mandya | Nagamangala | Improvements to Jodialphahalli Tank in Nagamangala Taluk Mandya District (already approved for Rs. 104.00 lakhs in action plan 1st year Sl. No. 171) | 104.00 | 164.00 |
| 2 | Mysore | Narasipura | Improvements to Kolathuru UM Kere (2nd year Sl. No. 192) | 35.00 | Work dropped | Chamaraja nagara | Kollegala | Improvements to Baragi Tank in Kollegala Taluk Chamarajanagara District | Alternative work | 101.00 |
| 3 | Mysore | Narasipura | Improvements to Kempanapura Tank (2nd year Sl. No. 193) | 27.00 | Work dropped | | | | | |
| 4 | Chamaraja nagara | Kollegala | Dinahalli Tank (2nd year Sl. No. 186) | 50.00 | Work dropped | | | | | |
| 5 | | | | | | Bijapur | Muddebhihal | Madikeshirur | 78.00 | 142.00 |
| 6 | Bijapur | Bijapur | Bommanalli M.I. Tank | 120.00 | Work dropped | Bijapur | Bijapur | Restoration of Bommanahalli MI tank | Alternative work | 194.00 |
| 7 | Bijapur | Bijapur | Yakkundi M.I. Tank | 135.00 | Work dropped | Bijapur | Bijapur | Restoration of Yakkundi MI tank | Alternative work | 155.00 |
| 8 | Bijapur | B. Bage wadi | Sulakhod | 132.00 | Work dropped | | | | | |

| List of works approved having saving/Works dropped | | | | | | List of works involving Additional cost & or Alternative works approved | | | | |
|---|---|---|---|---|---|---|---|---|---|---|
| **Sl. No.** | **Districts** | **Taluk** | **Name of the Tank** | **Approved Estimated Cost as per action plan** | **Actual Estimated cost** | **Districts** | **Taluk** | **Name of the Tank** | **Estimated cast as per action plan** | **Estimated Cost as approved** |
| **1** | **2** | **3** | **4** | **5** | **6** | **7** | **8** | **9** | **10** | **11** |
| 9 | Tumkur | Tumkur | Improvement of Nagavalli amani tank | 83.00 | Work dropped | Tumkur | Tumkur | Improvements to Veeranayakanahalli tank | Alternative work | 45.00 |
| 10 | Tumkur | Tumkur | Improvement of Hebburu tank | 28.00 | Work dropped | Tumkur | Tumkur | Improvements to Mulukunte tank | Alternative work | 41.00 |
| 11 | Tumkur | Tumkur | Sasalu tank | 35.00 | Work dropped | Tumkur | Tumkur | Improvements to Doddasarangi tank | Alternative work | 40.00 |
| | | | | | | Tumkur | Tumkur | Improvements to Srungara Ane | Alternative work | 20.00 |
| 12 | UK | Haliyala | Golihalla Tank in Sy. No. 17 Block No. 24 | 29.00 | Work dropped | UK | Haliyala | Mandki tank Sy. No. 196 | Alternative work | 35.00 |
| 13 | UK | Haliyala | Havagi Kyadagikere in Sy. No. 64 Block No. | 45.50 | Work dropped | UK | Joida | Bairampali tank | Alternative work | 48.00 |
| 14 | UK | Haliyala | Kawalwad | 43.50 | Work dropped | UK | Joida | Sangve tank | Alternative work | 35.00 |
| 15 | Gulbarga | Chittapur | Restoration of Barrage across Kagina river near Ingalgi village | 235.00 | 193.78 | Gulbarga | Chittapur | Improvements of Barrage site-1 at Gundagurthi village | Alternative work | 40.00 |

**RUDRAMURTHY,**
Assistant Executive Engineer and
Ex-officio Under Secretary to Government
Water Resources Department (Minor Irrigation)

**P.R. 2017**

## FOREST, ECOLOGY AND ENVIRONMENT SECRETARIAT

**SUB :** Technical co-operation of GIZ for waste management in Karnataka-Partner Co financing of GIZ-ASEM for the activities-reg.

**READ :**

1) Proceedings of the 25th meeting of the Steering Committee constituted for implementation of Hazardous waste (Management, Handling and Transboundary Movement) Rules, 1989 held on 25-2-2011.

2) MoEF letter No. 3 (5)/16/2003-ASEM Cell-IC & SD dated 2nd February 2011.

3) Agreement entered into by the Department of Forest, Ecology and Enviroment (DFEE), Government of Karnataka and GIZ., Federal Republic of Germany dated 29th March 2012 for the project "Hazardous Waste and Waste Water Project for Karnataka (ASEM-HAWA)".

4) Letter No. ಕರಾಮಾನಿನಂ/ಅಪಾಯಕಾರಿ ತ್ಯಾಜ್ಯ/GIZ/2012-13/443 dated 18th August 2012

**Preamble :**

The Steering Committee constituted for implementation of Hazardous waste (Management, Handling and Transboundary Movement) Rules, 1989 during 25th meeting held on 25-2-2011 discussed about co-financing arrangement between Indian partners and Germany (GIZ) aiming at successful implementation in the areas identified by partners in pursuance to Indo German negotiations on development co-operation held in October 2009. The Steering Committee have agreed to approve the activities of the partner co-financing of GIZ-ASEM and inprinciple agreed to the Karnataka Government's fund contribution of Rs. 1 Crore per year to be set aside for HAWA activities and Rs. 25 Lakhs per year to be transferred to GIZ-ASEM for studies. The Ministry of Environment and Forests, Government of India, New Delhi vide letter read at (2) above have conveyed the Ministry's no objection to the proposal. It has been decided that the funds to be allocated for HAWA (GIZ-ASEM) project in a combi-finance mode will be met by the KSPCB.

Pursuant to the above decision made in the Steering Committee, an agreement has been entered into by the Department of Forest, Ecology and Environment (DFEE), Government of Karnataka and GIZ, Federal Republic of Germany on 29th March 2012 for the project "Hazardous Waste and Waste Water Project for Karnataka (ASEM-HAWA)".

In order to ensure smooth functioning of the arrangement made as per the above agreement entered into the following actions are necessary.

(a) The Karnataka State Pollution Control Board need to release Rs. 50 lakhs in two equal installments for the activities to be undertaken by GIZ-ASEM in the project duration of 21 months (01-04-2012 to 31-12-2013).

(b) Extension of necessary co-operation from the KSPCB and the State Department of Ecology and Environment in sharing of data, official industrial visits and other activities,

(c) The Karnataka State Pollution Control Board in their 184th meeting held on 17-7-2012 have agreed for the payment of Rs. 50 lakhs and the same has been communicated vide letter read at (4) above.

It is therefore felt necessary to convey approval of the Government for the activities envisaged under the project as per the agreement entered into and for release of necessary funds by the Karnataka State Pollution Control Board.

Hence the order.

### GOVERNMENT ORDER NO. FEE 146 ENV 2008, BANGALORE, DATED : 21-9-2012.

After careful consideration of the facts and circumstances in the preamble, Government are pleased to accord approval for the project "Hazardous Waste and Waste Water Project for Karnataka (ASEM-HAWA)" to be carried out as per the agreement read

at (2) above. The Karnataka State Pollution Control Board shall release the required budget of Rs. 50 lakhs as per the decision in the proceedings read at (1) and (4) above and extend all the required co-operation. The Karnataka State Pollution Control Board shall release Rs. 50 lakhs to ASEM-HAWA in two installments of Rs. 25 lakhs each towards the partner contribution.

By Order and in the name of the Governor of Karnataka,

**G.H. ANASUYAMMA**

Under Secretary to Government,

(Ecology and Environment),

**P.R. 2098** Forest, Ecology and Environment Department.

## ಆರ್ಥಿಕ ಸಚಿವಾಲಯ

### ಸೇರ್ಪಡೆ

### ಸಂಖ್ಯೆ : ಆಇ 4 ಸೇನಿಸೇ 11, ಬೆಂಗಳೂರು, ದಿನಾಂಕ : 13–9–2012

ದಿನಾಂಕ : 2–11–2011ರ ಸರ್ಕಾರಿ ಆದೇಶ ಸಂಖ್ಯೆ : ಆಇ 4 ಸೇನಿಸೇ 2011ರ ಆದೇಶ ಭಾಗದಲ್ಲಿನ ಮೊದಲ ಪ್ಯಾರಾದಲ್ಲಿನ ಮೊದಲ ವಾಕ್ಯದಲ್ಲಿನ "ಪಂಚಾಯತ್ ರಾಜ್ ಇಂಜಿನಿಯರಿಂಗ್" ಪದಗಳ ನಂತರದಲ್ಲಿ "ಇಲಾಖೆಯ ಅಧಿಕಾರಿಗಳಿಗೆ (ಪತ್ರಾಂಕಿತವಲ್ಲದ ಅಧಿಕಾರಿಗಳೂ ಸೇರಿದಂತೆ ಅನುಮತಿಸಲಾಗಿದೆ" ಎಂಬ ಪದಗಳ ಬದಲಿಗೆ "ಮತ್ತು ಸರ್ಕಾರದ ಇತರೆ ಇಲಾಖೆಗಳಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವಿವಿಧ ಇಂಜಿನಿಯರುಗಳಿಗೆ ಅನುಮತಿಸಲಾಗಿದೆ" ಎಂಬ ಪದಗಳನ್ನು ಬದಲಿಸಿ ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆಲಿಸ್ ಗೊನ್ಸಾಲ್ವಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 2095** ಆರ್ಥಿಕ ಇಲಾಖೆ (ಸೇವೆಗಳು–1).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವಾಲಯ

**ವಿಷಯ:** ಬೆಳಗಾವಿ ಮತ್ತು ಉಡುಪಿ ಜಿಲ್ಲೆಗಳಲ್ಲಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು [ಡಿ.ಡಿ.ಆರ್.ಸಿ] ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:** 1] ಸರ್ಕಾರದ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ:12–05–2011.

2] ತಿದ್ದುಪಡಿ ಸಂಖ್ಯೆ ಮಮಇ 173 ಪಿಎಚ್‌ಪಿ 2010–ದಿನಾಂಕ:29–07–2011.

3] ಸರ್ಕಾರದ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010,ದಿನಾಂಕ:28–09–2011.

4] ಸರ್ಕಾರದ ಆದೇಶ ಸಂಖ್ಯೆ: ಮಮಇ 251 ಪಿಎಚ್‌ಪಿ 2011, ದಿನಾಂಕ:14–12–2011.

5] ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/ಡಿಡಿಆರ್‌ಸಿ/ಬೆಳಗಾವಿ/ರಾ.ಸ.ಪ್ರ//2010–11–12–13/712, ದಿ:29–05–2012 ಮತ್ತು ವಿಹಿನಾಸಇ/ಸಿ8/ಡಿಡಿಆರ್‌ಸಿ/14/ಉಡುಪಿ/2012–13/911, ದಿನಾಂಕ:19–06–2012.

**ಪ್ರಸ್ತಾವನೆ:**

ಮೇಲೆ ಓದಲಾದ [1]ರ ಆದೇಶದಲ್ಲಿ ರಾಜ್ಯದ ಮೈಸೂರು, ಗದಗ ಮತ್ತು ರಾಯಚೂರು ಜಿಲ್ಲೆಗಳ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ) 2011–12ನೇ ಸಾಲಿನಿಂದ ರಾಜ್ಯ ಅನುದಾನದಡಿ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ [2]ರಲ್ಲಿ ದಿನಾಂಕ:12–05–2011ರ ಸರ್ಕಾರಿ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010ರ ಅನುಬಂಧ–1, 2 ಮತ್ತು 3ರ ಬದಲಿಗೆ ತಿದ್ದುಪಡಿ ಆದೇಶಕ್ಕೆ ಹೊಸದಾಗಿ ಲಗತ್ತಿಸಿರುವ ಅನುಬಂಧ–1, 2 ಮತ್ತು 3ನ್ನು ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು ಎಂದು ಆದೇಶಿಸಲಾಗಿತ್ತು.

ಮೇಲೆ ಓದಲಾದ [3]ರ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ:12–05–2011 ಹಾಗೂ ತಿದ್ದುಪಡಿ ಸಂಖ್ಯೆ ಮಮಇ 173 ಪಿಎಚ್‌ಪಿ 2010, ದಿನಾಂಕ:29–07–2011ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಕರ್ನಾಟಕ ರಾಜ್ಯದ

ಗದಗ ಜಿಲ್ಲೆಯಲ್ಲಿ ಸೆಪ್ಟೆಂಬರ್ 2011ರಿಂದ ಹಾಗೂ ಮೈಸೂರು, ರಾಯಚೂರು ಮತ್ತು ಹಾವೇರಿ ಜಿಲ್ಲೆಯಲ್ಲಿ ಅಕ್ಟೋಬರ್ 2011ರಿಂದ ಕ್ರಮವಾಗಿ ರೂ.19,25,800/– [ರೂಪಾಯಿ ಹತ್ತೊಂಭತ್ತು ಲಕ್ಷದ ಇಪ್ಪತ್ತೈದು ಸಾವಿರದ ಎಂಟುನೂರುಗಳು ಮಾತ್ರ], ರೂ.14,36,400/–[ರೂಪಾಯಿ ಹದಿನಾಲ್ಕು ಲಕ್ಷದ ಮೂವತ್ತಾರು ಸಾವಿರದ ನಾಲ್ಕುನೂರು ಮಾತ್ರ], ರೂ.17,36,400/– [ರೂಪಾಯಿ ಹದಿನೇಳು ಲಕ್ಷದ ಮೂವತ್ತಾರು ಸಾವಿರದ ನಾಲ್ಕುನೂರು ಮಾತ್ರ] ಮತ್ತು ರೂ.17,36,400/–[ರೂಪಾಯಿ ಹದಿನೇಳು ಲಕ್ಷದ ಮೂವತ್ತಾರು ಸಾವಿರದ ನಾಲ್ಕುನೂರು ಮಾತ್ರ] ಗಳ ವೆಚ್ಚದಲ್ಲಿ ಸದರಿ ಆದೇಶಕ್ಕೆ ಲಗತ್ತಿಸಲಾದ ಅನುಬಂಧ–1 ರಿಂದ 4ರಲ್ಲಿರುವಂತೆ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ) ರಾಜ್ಯ ಅನುದಾನದಡಿ ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ, ಅನುಬಂಧ–5ರಲ್ಲಿ ಸೂಚಿಸಿರುವಂತೆ ಯೋಜನೆಯ ಮಾರ್ಗಸೂಚಿಯನುಸಾರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (4)ರ ಆದೇಶದಲ್ಲಿ ಕರ್ನಾಟಕ ರಾಜ್ಯದ ಬೆಂಗಳೂರು ನಗರ ಜಿಲ್ಲೆಯಲ್ಲಿ ಡಿಸೆಂಬರ್ 2011ರಿಂದ ರೂ.12,05,600/–ಗಳ ವೆಚ್ಚದಲ್ಲಿ ಸದರಿ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು (ಡಿ.ಡಿ.ಆರ್.ಸಿ) ರಾಜ್ಯ ಅನುದಾನದಡಿ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ಯೋಜನೆಯ ಮಾರ್ಗಸೂಚಿಯನುಸಾರ ನಡೆಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಸದರಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರದ ಪ್ರಸ್ತಾವನೆಯನ್ನು ಸಂಬಂಧಪಟ್ಟ ಸಂಸ್ಥೆಯಿಂದ ಪಡೆದು ಆಯವ್ಯಯವನ್ನು ನೇರವಾಗಿ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಬಿಡುಗಡೆ ಮಾಡಲು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ. ಸದರಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು ಈಗಾಗಲೇ ರಾಜ್ಯ ಸಲಹಾ ಕೇಂದ್ರದಲ್ಲಿ ಲಭ್ಯವಿರುವ ಯಂತ್ರೋಪಕರಣಗಳು ಹಾಗೂ ಉಪಕರಣಗಳನ್ನು (Rehabilitation equipments and machineries) ಉಪಯೋಗಿಸಿಕೊಂಡು ನಿರ್ವಹಿಸತಕ್ಕದ್ದು ಎಂದು ಆದೇಶಿಸಲಾಗಿದೆ.

ಮೇಲೆ ಓದಲಾದ [5]ರ ಪತ್ರಗಳಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಬೆಳಗಾವಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವು ಕೇಂದ್ರ ಸರ್ಕಾರದ ಅನುದಾನದಡಿಯಲ್ಲಿ 2001–02ನೇ ಸಾಲಿನಿಂದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಮುಖಾಂತರ ಅನುಷ್ಠಾನಗೊಳಿಸುತ್ತಿದ್ದು, 2005–06ನೇ ಸಾಲಿನಿಂದ ಇಲ್ಲಿಯವರೆಗೆ ಕೇಂದ್ರ ಅನುದಾನ ಬಿಡುಗಡೆ ಮಾಡಿರುವುದಿಲ್ಲ. ಇದರಿಂದಾಗಿ ನಿರೀಕ್ಷಿತ ಮಟ್ಟದಲ್ಲಿ ಹಾಗೂ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು/ವಿಕಲಚೇತನರ ಪುನರ್ವಸತಿ ಸೇವಾ ಸೌಲಭ್ಯವನ್ನು ಒದಗಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಸದರಿ ಕೇಂದ್ರವನ್ನು 2012–13ನೇ ಸಾಲಿನಿಂದ ರಾಜ್ಯ ಅನುದಾನಕ್ಕೆ ಒಳಪಡಿಸುವಂತೆ ಕೋರಿರುತ್ತಾರೆ. ಜಿಲ್ಲಾಧಿಕಾರಿಗಳು, ಬೆಳಗಾವಿ ಇವರು ಜಿಲ್ಲಾ ವಿಕಲಚೇತನರ ಪುನರ್ವಸತಿ ಕೇಂದ್ರಕ್ಕೆ 2012–13ನೇ ಸಾಲಿಗೆ ಸಹಾಯಾನುದಾನವನ್ನು ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವುದರಿಂದ ಬೆಳಗಾವಿ ಜಿಲ್ಲಾ ವಿಕಲಚೇತನರ ಪುನರ್ವಸತಿ ಕೇಂದ್ರವನ್ನು ರಾಜ್ಯ ಅನುದಾನದಡಿ ಜುಲೈ 2012 ರಿಂದ ಮಾರ್ಚ್ 2013ರವರೆಗೆ ಲೆಕ್ಕಶೀರ್ಷಿಕೆ 2235–02–101–0–99 ಯೋಜನೆ ಉಪಲೆಕ್ಕಶೀರ್ಷಿಕೆ 100 ಧನಸಹಾಯ ಮತ್ತು ಪರಿಹಾರ ಯೋಜನೆಯಡಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳಿಗೆ ನಿಗದಿಪಡಿಸಲಾದ ಆಯವ್ಯಯದಡಿ ಭರಿಸಲು ಆವರ್ತಕ ಮತ್ತು ಅನಾವರ್ತಕ ವೆಚ್ಚ ರೂ.19,04,600/–ಗಳಿಗೆ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಅಲ್ಲದೆ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ಇವರು 2012–13ನೇ ಸಾಲಿಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಶಾಖೆ, ಉಡುಪಿ ಇವರು ಆಗಸ್ಟ್ 2012ರಿಂದ ಪ್ರಾರಂಭಿಸಲು ಉದ್ದೇಶಿಸಿರುವ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಕ್ಕೆ ಲೆಕ್ಕಶೀರ್ಷಿಕೆ 2235–02–101–0–99 ಯೋಜನೆ ಉಪಲೆಕ್ಕಶೀರ್ಷಿಕೆ 100 ಧನಸಹಾಯ ಮತ್ತು ಪರಿಹಾರ ಯೋಜನೆಯಡಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳಿಗೆ ನಿಗದಿಪಡಿಸಲಾದ ಆಯವ್ಯಯದಡಿ ರೂ.21,15,200/–ಗಳಿಗೆ ಮಂಜೂರಾತಿ ನೀಡುವಂತೆ ಸಹ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 193 ಪಿಎಚ್‌ಪಿ 2012, ಬೆಂಗಳೂರು, ದಿ: 17–07–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯಲ್ಲಿ ಈಗಾಗಲೇ ಅನುಷ್ಠಾನದಲ್ಲಿರುವ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಕ್ಕೆ ಜುಲೈ 2012 ರಿಂದ ಮಾರ್ಚ್ 2013ರವರೆಗೆ ಆವರ್ತಕ ಮತ್ತು ಅನಾವರ್ತಕ ವೆಚ್ಚ ರೂ.19,04,600/–[ರೂಪಾಯಿ ಹತ್ತೊಂಭತ್ತು ಲಕ್ಷದ ನಾಲ್ಕು ಸಾವಿರದ ಆರು ನೂರುಗಳು ಮಾತ್ರ] ಗಳಿಗೆ ಮತ್ತು ಉಡುಪಿ ಜಿಲ್ಲೆಯಲ್ಲಿ ಆಗಸ್ಟ್ 2012ರಿಂದ ಪ್ರಾರಂಭಿಸಲು ಉದ್ದೇಶಿಸಿರುವ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಕ್ಕೆ ಅಗಸ್ಟ್ 2012 ರಿಂದ ಮಾರ್ಚ್ 2013ರವರೆಗೆ ಆವರ್ತಕ ಮತ್ತು ಅನಾವರ್ತಕ ವೆಚ್ಚ ರೂ. 21,15,200/–[ರೂಪಾಯಿ ಇಪ್ಪತ್ತೊಂದು ಲಕ್ಷದ ಹದಿನೈದು ಸಾವರದ ಎರಡು ನೂರುಗಳು ಮಾತ್ರ]ಗಳಿಗೆ ರಾಜ್ಯ ಅನುದಾನದಡಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ–1 ಮತ್ತು ಅನುಬಂಧ–2ರಲ್ಲಿರುವಂತೆ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ನಡೆಸಲು ದಿನಾಂಕ:28–09–2011ರ ಸರ್ಕಾರಿ ಆದೇಶ ಸಂಖ್ಯೆ: ಮಮಇ 173 ಪಿಹೆಚ್‌ಪಿ 2010ರ ಅನುಬಂಧ–5ರಲ್ಕಿ ಸೂಚಿಸಿರುವಂತೆ ಯೋಜನೆಯ ಮಾರ್ಗಸೂಚನೆಗಳನುಸಾರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2235–02–101–0–99 ಯೋಜನೆ ಉಪಲೆಕ್ಕಶೀರ್ಷಿಕೆ 100 ಧನಸಹಾಯ ಮತ್ತು ಪರಿಹಾರ ಯೋಜನೆಯಡಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳಿಗೆ ನಿಗದಿಪಡಿಸಲಾದ ಆಯವ್ಯಯದಡಿ ಭರಿಸತಕ್ಕದ್ದು. ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರದ

ಪ್ರಸ್ತಾವನೆಯನ್ನು ಸಂಬಂಧಪಟ್ಟ ಸಂಸ್ಥೆಯಿಂದ ಪಡೆದು ಆಯವ್ಯಯವನ್ನು ನೇರವಾಗಿ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಬಿಡುಗಡೆ ಮಾಡಲು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಸಕಕಾ 115 ಆಂಆಸ 2012, ದಿನಾಂಕ:02-07-2012 ಮತ್ತು 09-07-2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

## ಅನುಬಂಧ-1

ಬೆಳಗಾವಿ ಜಿಲ್ಲೆಯಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಶಾಖೆ, ಬೆಳಗಾವಿ ಇವರ ವತಿಯಿಂದ ನಡೆಸುತ್ತಿರುವ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಕ್ಕೆ 2012-13ನೇ ಸಾಲಿಗೆ ಜುಲೈ 2012ರಿಂದ ಮಾರ್ಚ್2013ರವರೆಗೆ ಬೇಕಾಗಿರುವ ಆಯವ್ಯಯ

| ಕ್ರ ಸಂ | ವಿವರಗಳು | | ಮಾಸಿಕ ಗೌರವಧನ | ಜುಲೈ 2012 ರಿಂದ ಮಾರ್ಚ್ 2013ರ ಅವಧಿಯವರೆಗೆ ಬೇಕಾಗುವ ಆಯವ್ಯಯ (ರೂ.ಗಳಲ್ಲಿ) |
|---|---|---|---|---|
| | ಹುದ್ದೆ | ಸಂಖ್ಯೆ | | |
| 1 | ಸಮಾಜ ಸೇವಾ ಕಾರ್ಯಕರ್ತರು(ಯೂನಿಟ್ ಇನ್‌ಚಾರ್ಜ್) | 01 | 15000x9x1 | 135000 |
| 2 | ಕೃತಕಾಂಗ ಜೋಡಣೆ ಪಿ&ಒ ಅಭಿಯಂತರರು 3- | 01 | 15000x9x1 | 135000 |
| 3 | ಪ್ರಾಸ್ಥೊಟಿಸ್ಟ್ & ಆರ್ಥೋಟಿಸ್ಟ್ | 02 | 10000x9x2 | 180000 |
| 4 | ಲೆದರ್‌ವರ್ಕರ್ / ಶೂ ಮೇಕರ್ | 01 | 5000x9x1 | 45000 |
| 5 | ಕ್ಲಿನಿಕಲ್ ಸೈಕಾಲಿಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ 1000ಗಳಂತೆ) | 01 | 12000x9x1 | 108000 |
| 6 | ಸ್ಪೀಚ್ ಥೆರಪಿಸ್ಟ್ & ಆಡಿಯಾಲಿಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ.1000/-ಗಳಂತೆ) | 01 | 12000x9x1 | 108000 |
| 7 | ಮೊಬಿಲಿಟಿ ಇನ್ಸ್‌ಟ್ರಕ್ಟರ್ | 01 | 5000x9x1 | 45000 |
| 8 | ಸ್ಪೆಷಲ್ ಎಜುಕೇಟರ್ (ಹೆಚ್.ಐ., ವಿ.ಐ., ಎಂ.ಆರ್) | 03 | 5000x9x3 | 135000 |
| 9 | ಇಯರ್ ಮೋಲ್ಡ್ ಟೆಕ್ನಿಷಿಯನ್ | 01 | 5000x9x1 | 45000 |
| 10 | ಕೀಲು ಮತ್ತು ಮೂಳೆ ತಜ್ಞರು(ವಾರಕ್ಕೆ 3 ದಿನ, ದಿನಕ್ಕೆ ರೂ.675/-ರಂತೆ) | 01 | 8100x9x1 | 72900 |
| 11 | ಆಪ್ತಾಲ್ಮೋಲಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ.675/-ರಂತೆ) | 01 | 8100x9x1 | 72900 |
| 12. | ಇ.ಎನ್.ಟಿ ಸ್ಪೆಷಲಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ.675/-ರಂತೆ) | 01 | 8100x9x1 | 72900 |
| 13 | ಸೈಕಿಯಾಟ್ರಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ.675/-ರಂತೆ) | 01 | 8100x9x1 | 72900 |
| 14 | ಅಕೌಂಟೆಂಟ್ ಕಂ ಕ್ಲರ್ಕ್ | 01 | 8000x9x1 | 72000 |
| 15 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 01 | 6000x9x1 | 54000 |
| 16 | ಕಂಪ್ಯೂಟರ್ ಆಪರೇಟರ್ | 01 | 5000x9x1 | 45000 |

| ಕ್ರ ಸಂ | ವಿವರಗಳು | | ಮಾಸಿಕ ಗೌರವಧನ | ಜುಲೈ 2012 ರಿಂದ ಮಾರ್ಚ್ 2013ರ ಅವಧಿಯವರೆಗೆ ಬೇಕಾಗುವ ಆಯವ್ಯಯ (ರೂ.ಗಳಲ್ಲಿ) |
|---|---|---|---|---|
| | ಹುದ್ದೆ | ಸಂಖ್ಯೆ | | |
| 17 | ಕಛೇರಿ ಸೇವಕರು | 01 | 4000x9x1 | 36000 |
| 18 | ರಾತ್ರಿ ಕಾವಲುಗಾರರು | 01 | 4000x9x1 | 36000 |
| 19 | ಕಟ್ಟಡ ನಿರ್ವಹಣೆ /ಬಾಡಿಗೆ | 01 | 3000x9x1 | 27000 |
| 20 | ಪ್ರಯಾಣ ವೆಚ್ಚಗಳು | – | 10000x9 | 90000 |
| 21 | ಕಛೇರಿ ವೆಚ್ಚಗಳು | – | 4000x9 | 36000 |
| 22 | ಲೇಖನ ಸಾಮಗ್ರಿ/ಪೋಸ್ಟೇಜ್ | – | 4000x9 | 36000 |
| 23 | ಇತರೆ ವೆಚ್ಚಗಳು | – | 5000x9 | 45000 |
| | | | **ಒಟ್ಟು (1)** | **17,04,600** |
| | **ಅನಾವರ್ತಕ ವೆಚ್ಚಗಳು** | | | |
| | ಮೆಷಿನರಿ ಮತ್ತು ಎಕ್ವಿಪ್‌ಮೆಂಟ್ಸ್ | | | **100000** |
| | ಕಂಪ್ಯೂಟರ್ ಮತ್ತು ಪರಿಕರಗಳು | | | **50000** |
| | ಪೀಠೋಪಕರಣಗಳು | | | **50000** |
| | | | **ಒಟ್ಟು (2)** | **2,00,000** |
| | **ಒಟ್ಟು (1) ಮತ್ತು (2)** | | | **19,04,600** |
| | **(ರೂಪಾಯಿ ಹತ್ತೊಂಭತ್ತು ಲಕ್ಷದ ನಾಲ್ಕು ಸಾವಿರದ ಆರುನೂರು ಮಾತ್ರ)** | | | |

**ಬಿ.ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

**ಅನುಬಂಧ–2**

ಉಡುಪಿ ಜಿಲ್ಲೆಯಲ್ಲಿ 2012–13ನೇ ಸಾಲಿಗೆ ಆಗಸ್ಟ್ 2012ರಿಂದ ಮಾರ್ಚ್2013ರವರೆಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಶಾಖೆ, ಉಡುಪಿ ಇವರ ವತಿಯಿಂದ ಅನುಷ್ಠಾನಗೊಳಿಸಲು ಉದ್ದೇಶಿಸಿರುವ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಕ್ಕೆ ಬೇಕಾಗಿರುವ ಆಯವ್ಯಯ

| ಕ್ರ ಸಂ | ವಿವರಗಳು | | ಮಾಸಿಕ ಗೌರವಧನ | ಆಗಸ್ಟ್ 2012 ರಿಂದ ಮಾರ್ಚ್ 2013ರ ಅವಧಿಯವರೆಗೆ ಬೇಕಾಗುವ ಆಯವ್ಯಯ (ರೂ.ಗಳಲ್ಲಿ) |
|---|---|---|---|---|
| | ಹುದ್ದೆ | ಸಂಖ್ಯೆ | | |
| 1 | ಸಮಾಜ ಸೇವಾ ಕಾರ್ಯಕರ್ತರು(ಯೂನಿಟ್ ಇನ್‌ಚಾರ್ಜ್) | 01 | 15000x8x1 | 120000 |
| 2 | ಕೃತಕಾಂಗ ಜೋಡಣೆ ಪಿ&ಒ ಅಭಿಯಂತರರು 3– | 01 | 15000x8x1 | 120000 |
| 3 | ಪ್ರಾಸ್ಥೊಟಿಸ್ಟ್ & ಆರ್ಥೋಟಿಸ್ಟ್ | 02 | 10000x8x2 | 160000 |
| 4 | ಲೆದರ್‌ವರ್ಕರ್ / ಶೂ ಮೇಕರ್ | 01 | 5000x8x1 | 40000 |
| 5 | ಕ್ಲಿನಿಕಲ್ ಸೈಕಾಲಿಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ 1000ಗಳಂತೆ) | 01 | 12000x8x1 | 96000 |
| 6 | ಸ್ಪೀಚ್ ಥೆರಪಿಸ್ಟ್ & ಆಡಿಯಾಲಿಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ.1000/–ಗಳಂತೆ) | 01 | 12000x8x1 | 96000 |

| ಕ್ರ ಸಂ | ವಿವರಗಳು | | ಮಾಸಿಕ ಗೌರವಧನ | ಆಗಸ್ಟ್ 2012 ರಿಂದ ಮಾರ್ಚ್ 2013ರ ಅವಧಿಯವರೆಗೆ ಬೇಕಾಗುವ ಆಯವ್ಯಯ (ರೂ.ಗಳಲ್ಲಿ) |
|---|---|---|---|---|
| | ಹುದ್ದೆ | ಸಂಖ್ಯೆ | | |
| 7 | ಮೊಬಿಲಿಟಿ ಇನ್ಸ್‌ಟ್ರಕ್ಟರ್ | 01 | 5000x8x1 | 40000 |
| 8 | ಸ್ಪೆಷಲ್ ಎಜುಕೇಟರ್ (ಹೆಚ್.ಐ., ವಿ.ಐ., ಎಂ.ಆರ್) | 03 | 5000x8x3 | 120000 |
| 9 | ಇಯರ್ ಮೋಲ್ಡ್ ಟೆಕ್ನಿಷಿಯನ್ | 01 | 5000x8x1 | 40000 |
| 10 | ಕೀಲು ಮತ್ತು ಮೂಳೆ ತಜ್ಞರು(ವಾರಕ್ಕೆ 3 ದಿನ, ದಿನಕ್ಕೆ ರೂ.675/–ರಂತೆ) | 01 | 8100x8x1 | 64800 |
| 11 | ಆಪ್ತಾಲ್ಮೋಲಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ.675/–ರಂತೆ) | 01 | 8100x8x1 | 64800 |
| 12. | ಇ.ಎನ್.ಟಿ ಸ್ಪೆಷಲಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ.675/–ರಂತೆ) | 01 | 8100x8x1 | 64800 |
| 13 | ಸೈಕಿಯಾಟ್ರಿಸ್ಟ್ (ವಾರಕ್ಕೆ 03 ದಿನಗಳು, ದಿನಕ್ಕೆ ರೂ.675/–ರಂತೆ) | 01 | 8100x8x1 | 64800 |
| 14 | ಅಕೌಂಟೆಂಟ್ ಕಂ ಕ್ಲರ್ಕ್ | 01 | 8000x8x1 | 64000 |
| 15 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 01 | 6000x8x1 | 48000 |
| 16 | ಕಂಪ್ಯೂಟರ್ ಆಪರೇಟರ್ | 01 | 5000x8x1 | 40000 |
| 17 | ಕಛೇರಿ ಸೇವಕರು | 01 | 4000x8x1 | 32000 |
| 18 | ರಾತ್ರಿ ಕಾವಲುಗಾರರು | 01 | 4000x8x1 | 32000 |
| 19 | ಕಟ್ಟಡ ನಿರ್ವಹಣೆ /ಬಾಡಿಗೆ | 01 | 3000x8x1 | 24000 |
| 20 | ಪ್ರಯಾಣ ವೆಚ್ಚಗಳು | – | 10000x8 | 80000 |
| 21 | ಕಛೇರಿ ವೆಚ್ಚಗಳು | – | 4000x8 | 32000 |
| 22 | ಲೇಖನ ಸಾಮಗ್ರಿ/ಪೋಸ್ಟೇಜ್ | – | 4000x8 | 32000 |
| 23 | ಇತರೆ ವೆಚ್ಚಗಳು | – | 5000x8 | 40000 |
| | | | **ಒಟ್ಟು (1)** | **15,15,200** |
| | **ಅನಾವರ್ತಕ ವೆಚ್ಚಗಳು** | | | |
| | ಮೆಷಿನರಿ ಮತ್ತು ಎಕ್ವಿಪ್‌ಮೆಂಟ್ಸ್ | | | **500000** |
| | ಕಂಪ್ಯೂಟರ್ ಮತ್ತು ಪರಿಕರಗಳು | | | **50000** |
| | ಪೀಠೋಪಕರಣಗಳು | | | **50000** |
| | | | **ಒಟ್ಟು (2)** | **6,00,000** |
| | **ಒಟ್ಟು (1) ಮತ್ತು (2)** | | | **21,15,200** |
| | **(ರೂಪಾಯಿ ಇಪ್ಪತ್ತೊಂದು ಲಕ್ಷದ ಹದಿನೈದು ಸಾವಿರದ ಎರಡುನೂರು ಮಾತ್ರ)** | | | |

**ಬಿ.ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ

**ಪಿ.ಆರ್. 1996**